# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 214 (161)

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ
(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 02.02.2021

ವಿಷಯ: : ಬೀದರ್ ಜಿಲ್ಲೆಯ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ಜಿಲ್ಲೆಯಲ್ಲಿ ಬಂಡವಾಳ ಹೂಡಿಕೆ ಬಗ್ಗೆ

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಜಿಲ್ಲೆಯಲ್ಲಿ 10 ವರ್ಷದಲ್ಲಿ ರಾಜ್ಯ ಉನ್ನತ ಮಟ್ಟದ ಸಮಿತಿಯು 7 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಅವುಗಳಲ್ಲಿ 3 ಯೋಜನೆಗಳು ಕಾರ್ಯಾರಂಭವಾಗಿದ್ದು 01 ಯೋಜನೆಯು ಕಾರ್ಯ ಪ್ರಗತಿಯಲ್ಲಿದ್ದು ಉಳಿದ 3 ಯೋಜನೆಗಳು ಅನುಷ್ಠಾನದಿಂದ ಹೊರಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಬೀದರ್ ಜಿಲ್ಲೆಯಲ್ಲಿ 2009-10ನೇ ಸಾಲಿನಿಂದ 2020-21 ಡಿಸೆಂಬರ್ ವರೆಗೆ ರಾಜ್ಯ ಉನ್ನತ ಮಟ್ಟದ ಸಮಿತಿಯು 7 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಅವುಗಳಲ್ಲಿ 3 ಯೋಜನೆಗಳು ಕಾರ್ಯರಂಭವಾಗಿದ್ದು, 01 ಯೋಜನೆಯು ಕಾರ್ಯ ಪ್ರಗತಿಯಲ್ಲಿದ್ದು ಉಳಿದ 3 ಯೋಜನೆಗಳು ಅನುಷ್ಠಾನದಿಂದ ಹಿಂದೆ ಸರಿದಿರುವುದು. ಸರ್ಕಾರದ ಗಮನಕ್ಕೆ ಬಂದಿದೆ.<br><br>ಆರ್ಥಿಕ ಹಿಂಜರಿತ, ಸೂಕ್ತ ಭೂಮಿ ಲಭ್ಯವಿಲ್ಲದಿರುವುದು ಹಾಗೂ ಬೇಡಿಕೆ ಕಡಿಮೆಯಾಗಿರುವ ಕಾರಣಗಳಿಂದ 3 ಯೋಜನೆಗಳು ಅನುಷ್ಠಾನದಿಂದ ಹಿಂದೆ ಸರಿದಿದ್ದು, ಆರ್ಥಿಕ ಚೇತರಿಕೆ ಮತ್ತು ಬೇಡಿಕೆ ವೃದ್ಧಿಸಿದ ನಂತರ ಯೋಜನೆಗಳನ್ನು ಪ್ರಾರಂಭಿಸುವುದಾಗಿ ಘಟಕದ ಪ್ರತಿನಿಧಿಗಳು ತಿಳಿಸಿರುತ್ತಾರೆ. |
| ಆ | ಜಿಲ್ಲೆಯಲ್ಲಿ ಬಂಡವಾಳ ಆಕರ್ಷಿಸಲು ಕಾಂಪಿಟ್ ವಿತ್ ಚೈನಾ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯನ್ನು ಕೃಷಿ ಉತ್ಪನ್ನ ಉಪಕರಣಗಳ ಉತ್ಪಾದನಾ ವಲಯವನ್ನಾಗಿ | "ಕಾಂಪೀಟ್ ವಿತ್ ಚೈನಾ" ಯೋಜನೆಯಡಿ ಬೀದರ್ ಜಿಲ್ಲೆಯಲ್ಲಿ "ಕೃಷಿ ಉಪಕರಣಗಳ ಉತ್ಪಾದನಾ ಕ್ಲಸ್ಟರ್" ಅಭಿವೃದ್ಧಿಪಡಿಸಲು ಅನುಮೋದನೆಯಾಗಿದ್ದು ಈ ಸಂಬಂಧ ಅನುಷ್ಠಾನ ರೂಪುರೇಷೆಗಳನ್ನು ಸಿದ್ಧಪಡಿಸಲು ಕೃಷಿ ಉಪಕರಣ ಉತ್ಪಾದನಾ ವಲಯದ ಪ್ರಮುಖ ಕೈಗಾರಿಕೋದ್ಯಮಿಗಳು ಹಾಗೂ ವಿಷಯ ಪರಿಣಿತರನ್ನೊಳಗೊಂಡ "ವಿಶನ್ ಗ್ರೂಪ್" ಸ್ಥಾಪಿಸಲಾಗಿದೆ. ಸದರಿ |

| | | |
|---|---|---|
| | ಘೋಷಿಸಿದ್ದರೂ ಇಲ್ಲಿಯವರೆಗೆ ಯಾವುದೇ ಪ್ರಗತಿ ಕಂಡು ಬಂದಿಲ್ಲದಿರುವುದರಿಂದ ಈ ಯೋಜನೆಯು ಯಾವ ಹಂತದಲ್ಲಿದೆ; (ವಿವರ ನೀಡುವುದು) | ವಿಶನ್ ಗ್ರೂಪ್ ಸದಸ್ಯರು ಬೀದರ್ ಜಿಲ್ಲೆಯ ವಿವಿಧ ಪ್ರದೇಶಗಳ ಪ್ರವಾಸವನ್ನು ಕೈಗೊಂಡಿದ್ದು ಮೊದಲ ಹಂತದಲ್ಲಿ ಬೀದರ್‌ನ ಕೋಳಾರ್ ಕೈಗಾರಿಕಾ ಪ್ರದೇಶದಲ್ಲಿ ಸದರಿ ಕ್ಲಸ್ಟರ್‌ನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ, ಬೀದರ್‌ನ ಕೋಳಾರ್ ಕೆ.ಐ.ಎ.ಡಿ.ಬಿ ಕೈಗಾರಿಕಾ ಪ್ರದೇಶದ ಎರಡನೇ ಹಂತದಲ್ಲಿ ಲಭ್ಯವಿರುವ ಭೂಮಿಯನ್ನು ಕೃಷಿ ಉಪಕರಣ ಉತ್ಪಾದನಾ ಕ್ಲಸ್ಟರ್ ಸ್ಥಾಪಿಸಲು ಕಾಯ್ದಿರಿಸಲಾಗಿದೆ. ಸದರಿ ಕ್ಲಸ್ಟರ್‌ನಲ್ಲಿ ಬಂಡವಾಳ ಹೂಡಲು ಈಗಾಗಲೇ 7 ಕೈಗಾರಿಕೆಗಳು ಮುಂದೆ ಬಂದಿದ್ದು ಇನ್ನೂ ಹೆಚ್ಚಿನ ಕೈಗಾರಿಕೆಗಳೊಂದಿಗೆ ಬಂಡವಾಳ ಹೂಡಿಕೆ ಬಗ್ಗೆ ಚರ್ಚೆ ನಡೆಸಲಾಗುತ್ತಿದೆ. ಸದರಿ ಕ್ಲಸ್ಟರ್‌ನಲ್ಲಿ ಬಂಡವಾಳ ಹೂಡುವ "ಕೃಷಿ ಉಪಕರಣ" ಉತ್ಪಾದನಾ ಘಟಕಗಳಿಗೆ ವಿಶನ್ ಗ್ರೂಪ್ ರವರ ಶಿಫಾರಸ್ಸಿನ ಆಧಾರದ ಮೇಲೆ "ವಿಶೇಷ ಪ್ರೋತ್ಸಾಹನ ಪ್ಯಾಕೇಜ್" ಸಿದ್ಧಪಡಿಸಲಾಗಿದ್ದು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಇ | ಜಿಲ್ಲೆಗೆ ರಾಜ್ಯ ಏಕಗವಾಕ್ಷಿ ಸಮಿತಿಯು ಕಳೆದ 10 ವರ್ಷಗಳಲ್ಲಿ 56 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಅವುಗಳಲ್ಲಿ 23 ಘಟಕಗಳು ಕಾರ್ಯಾರಂಭ ಮಾಡಿದ್ದು, ಇವುಗಳಲ್ಲಿ 260.71 ಬಂಡವಾಳ ಹೂಡಿಕೆಯಾಗಿದ್ದು, 18 ಯೋಜನೆಗಳು ಅನುಷ್ಠಾನದ ಹಂತದಲ್ಲಿದ್ದು ಉಳಿದ 16 ಯೋಜನೆಗಳು ಅನುಷ್ಠಾನದಿಂದ ಹಿಂದೆ ಸರಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಬೀದರ್ ಜಿಲ್ಲೆಯಲ್ಲಿ 2009-10ನೇ ಸಾಲಿನಿಂದ 2020-21 ಡಿಸೆಂಬರ್ ವರೆಗೆ ರಾಜ್ಯ ಮಟ್ಟದ ಏಕ ಗವಾಕ್ಷಿ ಸಮಿತಿಯಿಂದ 60 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು. ಇವುಗಳಲ್ಲಿ ರೂ.1165 ಕೋಟಿ ಬಂಡವಾಳ ಹೂಡಿಕೆಯಾಗಲಿದ್ದು 5139 ಜನರಿಗೆ ಉದ್ಯೋಗ ಸೃಷ್ಟಿಯಾಗಲಿದೆ.<br><br>ಅವುಗಳಲ್ಲಿ 25 ಯೋಜನೆಗಳು ಕಾರ್ಯರಂಭ ಮಾಡಿದ್ದು, ಇವುಗಳಲ್ಲಿ ರೂ.376 ಕೋಟಿ ಬಂಡವಾಳ ಹೂಡಿಕೆಯಾಗಿದ್ದು, 1632 ಜನರಿಗೆ ಉದ್ಯೋಗ ಒದಗಿರುತ್ತದೆ.<br><br>21 ಯೋಜನೆಗಳು ಅನುಷ್ಠಾನದ ವಿವಿಧ ಹಂತಗಳಲ್ಲಿದ್ದು, ಅವುಗಳಲ್ಲಿ ರೂ.206 ಕೋಟಿ ಬಂಡವಾಳ ಹೂಡಿಕೆಯಾಗಲಿದ್ದು, 2003 ಜನರಿಗೆ ಉದ್ಯೋಗ ಒದಗಲಿದೆ.<br><br>14 ಯೋಜನೆಗಳು, ಆರ್ಥಿಕ ಚೇತರಿಕೆ ಮತ್ತು ಬೇಡಿಕೆ ವೃದ್ಧಿಸಿದ ನಂತರ ಪ್ರಾರಂಭಿಸುವುದಾಗಿ ಘಟಕದ ಪ್ರತಿನಿಧಿಗಳು ತಿಳಿಸಿರುತ್ತಾರೆ. |

ಸಿಐ 39 ಎಸ್‌ಪಿಐ 2021

**(ಜಗದೀಶ್ ಶೆಟ್ಟರ್)**
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು